ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 21 ನೇ ಸೆಪ್ಟೆಂಬರ್, 2020

ಅನಧಿಕೃತ ಶಿಕ್ಷಣ ಸಂಸ್ಥೆಗಳ ವಿರುದ್ಧ ಕ್ರಮದ ಬಗ್ಗೆ

ಶ್ರೀ ಅರವಿಂದ ಕುಮಾರ್ ಅರಳಿ(ವಿಧಾನಸಭೆಯಿಂದ ಚುನಾಯಿತರಾದವರು) –

12 (46) ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಬೀದರ್ ಜಿಲ್ಲೆಯಲ್ಲಿ ಸರ್ಕಾರದಿಂದ ಷರತ್ತುಬದ್ಧವಾದ ಪರವಾನಗಿ ಪಡೆದು ಯಾವುದೇ ಮೂಲಭೂತವಾದ ಸವಲತ್ತು ನೀಡದೇ ತಗಡಿನ ಶೆಡ್ಡಿನಲ್ಲಿ ಮಕ್ಕಳಿಗೆ ಪಾಠ ಬೋಧನೆ ಮಾಡುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಅವುಗಳ ಸಂಖ್ಯೆ ಎಷ್ಟು; ಆ ಸಂಸ್ಥೆಗಳ ಹೆಸರುಗಳನ್ನು ನೀಡುವುದು; ಅವುಗಳ ವಿರುದ್ಧ ಸರ್ಕಾರ ತೆಗೆದುಕೊಂಡ ಕ್ರಮವೇನು;

(ಆ) ಅನಧಿಕೃತವಾಗಿ ನಡೆಯುತ್ತಿರುವ ಶಾಲೆಗಳ ವರದಿ ಡಿಡಿಪಿಐ ಕಚೇರಿಯಿಂದ ತಮಗೆ ಬಂದಿದೆಯೇ; ಬಂದಿದ್ದಲ್ಲಿ ಆ ಶಿಕ್ಷಣ ಸಂಸ್ಥೆಗಳ ವಿರುದ್ಧ ಸರ್ಕಾರ ತೆಗೆದುಕೊಂಡ ಕ್ರಮವೇನು; ಗಮನಕ್ಕೆ ಬರದಿದ್ದರೆ ಇದಕ್ಕೆ ಯಾರು ಹೊಣೆಗಾರರು;

(ಇ) ಒಂದು ಶಾಲೆ ಪರವಾನಗಿ ಪಡೆದು ಅನೇಕ ಶಾಲೆಗಳನ್ನು ನಡೆಸುತ್ತಿರುವ ಸಂಗತಿ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇಂತಹ ಪರವಾನಗಿ ಇಲ್ಲದ ಶಾಲೆಗಳ ವಿರುದ್ಧ ಏನು ಕ್ರಮ ಕೈಗೊಂಡಿದೆ; ಕೈಗೊಳ್ಳದಿದ್ದರೆ ಇಷ್ಟು ದಿವಸ ಸರ್ಕಾರ ಸುಮ್ಮನಿರಲು ಕಾರಣವೇನು?